## ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 243(1873) |
| ಸದಸ್ಯರ ಹೆಸರು | ಶ್ರೀಮತಿ ಭಾರತಿ ಶೆಟ್ಟಿ [ನಾಮ ನಿರ್ದೇಶನ ಹೊಂದಿದವರು] |
| ಉತ್ತರಿಸಬೇಕಾದ ದಿನಾಂಕ | 22-03-2021 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು |

| ಪ್ರಶ್ನೆ | ಉತ್ತರ |
|---|---|
| **ಅ)** ಮೂಲ ವಿಜ್ಞಾನವನ್ನು ಕುರಿತಂತೆ ರಾಜ್ಯದ ವಿದ್ಯಾರ್ಥಿಗಳಲ್ಲಿ ಆಸಕ್ತಿ ಯಾವ ಮಟ್ಟದಲ್ಲಿದೆ; | ಪ್ರಾಥಮಿಕ ಮತ್ತು ಪ್ರೌಢ ವಿದ್ಯಾರ್ಥಿಗಳಿಗೆ ಮೂಲ ವಿಜ್ಞಾನ ವಿಷಯದಲ್ಲಿ ಆಸಕ್ತಿಯ ಮಟ್ಟ ಉತ್ತಮವಾಗಿರುತ್ತದೆ.<br>ರಾಜ್ಯದ ಪ್ರಾಥಮಿಕ ಶಿಕ್ಷಣದಲ್ಲಿ 1-5ನೇ ತರಗತಿವರೆಗೆ ಮೂಲವಿಜ್ಞಾನದ ಅಂಶಗಳನ್ನು ಪರಿಸರ ಅಧ್ಯಯನ ಶೀರ್ಷಿಕೆ ಅಡಿ ಪರಿಚಯಿಸಲಾಗಿದೆ. 6-10ನೇ ತರಗತಿಯವರೆಗೆ 'ಸಾಮಾನ್ಯ ವಿಜ್ಞಾನ' ಶೀರ್ಷಿಕೆ ಅಡಿ ವಿದ್ಯಾರ್ಥಿಗಳು ಅಧ್ಯಯನ ಮಾಡುತ್ತಿದ್ದಾರೆ. ಇದು ಕಡ್ಡಾಯ ವಿಷಯವಾಗಿದ್ದು ಎಲ್ಲಾ ವಿದ್ಯಾರ್ಥಿಗಳು ವ್ಯಾಸಂಗ ಮಾಡಲೇಬೇಕು. ಆದುದರಿಂದ, ಎಲ್ಲಾ ಮಕ್ಕಳು ತರಗತಿ ಪ್ರಕ್ರಿಯೆಯಲ್ಲಿ ಆಸಕ್ತಿಯಿಂದ ಪಾಲ್ಗೊಳ್ಳುತ್ತಿದ್ದಾರೆ. |
| **ಆ)** ಮೂಲ ವಿಜ್ಞಾನದ ಅಧ್ಯಯನದಲ್ಲಿ ಶಿಕ್ಷಣ ಪಡೆಯುವವರಿಗೆ ಗುಣ ಮಟ್ಟದ ಅಧ್ಯಯನ ನೀಡಲಾಗುತ್ತಿದೆಯೇ; (ವಿವರ ಒದಗಿಸುವುದು) | ಹೌದು,<br>❖ ರಾಷ್ಟ್ರೀಯ ಶಿಕ್ಷಕರ ಶಿಕ್ಷಣ ಪರಿಷತ್ (NCTE) ಅಧಿಸೂಚನೆಗಳನ್ವಯ 6 ರಿಂದ 8 ನೇ ತರಗತಿಗಳಿಗೆ ನೇಮಿಸಬೇಕಾದ ಶಿಕ್ಷಕರ ವಿದ್ಯಾರ್ಹತೆಯನ್ನು ನಿಗದಿಪಡಿಸಿದೆ. ಈ ಅಧಿಸೂಚನೆಗಳನ್ನು ಮಕ್ಕಳ ಉಚಿತ ಹಾಗೂ ಕಡ್ಡಾಯ ಅಧಿನಿಯಮ 2009 ರಂತೆ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ (NCTE) ನಿಗದಿಪಡಿಸಿದ ವಿದ್ಯಾರ್ಹತೆಗಳನ್ನು ಕಡ್ಡಾಯವಾಗಿ ಪಾಲಿಸಬೇಕಾಗಿರುತ್ತದೆ. |

❖ ಈ ಹಿನ್ನಲೆಯಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ ಇಡಿ 626 ಪಿಬಿಎಸ್ 2014 ದಿನಾಂಕ 08.07.2017 ರ ಪ್ರಕಾರ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ಸಂಬಂಧಿಸಿದಂತೆ Karnataka Education Department Service (Department of Public Instruction) (Recruitment) (Amendment) Rules, 2017' ಜಾರಿಗೊಳಿಸಲಾಗಿದೆ.

❖ ಈ ಮೇಲಿನ ಸರ್ಕಾರದ ಅಧಿಸೂಚನೆ ಪ್ರಕಾರ ಸರ್ಕಾರಿ ಹಿರಿಯ ಪ್ರಾಥಮಿಕ ( 6 ರಿಂದ 8 ನೇ ತರಗತಿಗಳು) ಶಾಲೆಗಳಲ್ಲಿ ಕೆಳಗಿನ 03 ವಿಧದ ಶಿಕ್ಷಕರ ನೇಮಕಾತಿಯನ್ನು ಮಾಡಿಕೊಳ್ಳಲಾಗುತ್ತಿದೆ.

1. ಪದವೀಧರ ಪ್ರಾಥಮಿಕ ಶಿಕ್ಷಕರು (ಭಾಷೆಗಳು),
2. ಮತ್ತು ಪದವೀಧರ ಪ್ರಾಥಮಿಕ ಶಿಕ್ಷಕರು (ಗಣಿತ ಹಾಗೂ ವಿಜ್ಞಾನ),
3. ಪದವೀಧರ ಪ್ರಾಥಮಿಕ ಶಿಕ್ಷಕರು (ಸಮಾಜ ವಿಜ್ಞಾನ).

❖ ಇಡಿ 626 ಪಿಬಿಎಸ್ 2014 ದಿನಾಂಕ 08.07.2017 ರ ಪ್ರಕಾರ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ನೇಮಕಾತಿಗೆ ಸಂಬಂಧಿಸಿದಂತೆ Karnataka Education Department Service (Department of Public Instruction) (Recruitment) (Amendment) Rules, 2017' ವೃಂದ ಮತ್ತು ನೇಮಕಾತಿ ನಿಯಮಗಳ ಮೇರೆಗೆ, 2017–18 ನೇ ಸಾಲಿನಲ್ಲಿ 10000 ಪದವೀಧರ ಪ್ರಾಥಮಿಕ ಶಿಕ್ಷಕರ ಹುದ್ದೆಗಳನ್ನು ಅಧಿಸೂಚಿಸಲಾಗಿದ್ದು, ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ನೇಮಕಾತಿಗೆ ಅರ್ಹರಾದ 3389 ಅಭ್ಯರ್ಥಿಗಳನ್ನು ನೇಮಕಾತಿ ಮಾಡಿಕೊಳ್ಳಲಾಗಿದೆ.

❖ 10000 ಹುದ್ದೆಗಳಲ್ಲಿ ಮಿಕ್ಕುಳಿದ 6611 ಹಾಗೂ 2018–19ನೇ ಸಾಲಿಗೆ ಭರ್ತಿ ಮಾಡಲು ಅನುಮತಿ ನೀಡಲಾದ 4000 ಹುದ್ದೆಗಳು ಸೇರಿದಂತೆ ಒಟ್ಟು 10611 ಉದ್ದೇಶಿತ ಹುದ್ದೆಗಳು, ಅದರಲ್ಲಿ 10565 ಪದವೀಧರ ಪ್ರಾಥಮಿಕ ಶಿಕ್ಷಕರ ಹುದ್ದೆಗಳಿಗೆ

| | |
|---|---|
| | ನೇಮಕಾತಿಗೆ ದಿನಾಂಕ:05.03.2019 ಅಧಿಸೂಚಿಸಲಾಗಿತ್ತು, ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ನೇಮಕಾತಿಗೆ ಅರ್ಹರಾದ 1994 ಅಭ್ಯರ್ಥಿಗಳನ್ನು ನೇಮಕಾತಿ ಮಾಡಿಕೊಳ್ಳಲಾಗಿದೆ. ಅರ್ಹ ಅಭ್ಯರ್ಥಿಗಳ ಕೊರತೆಯಿಂದ ನಿರೀಕ್ಷಿತ ಮಟ್ಟದಲ್ಲಿ ಅಭ್ಯರ್ಥಿಗಳು ದೊರೆಯುತ್ತಿಲ್ಲ.<br>❖ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ಪದವೀಧರ (6 ರಿಂದ 8 ನೇ ತರಗತಿಗಳ) ಹುದ್ದೆಗಳ ನೇಮಕಾತಿಗೆ ಸಂಬಂಧಿಸಿದಂತೆ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ಕೆಲವೊಂದು ವಿಷಯಗಳನ್ನು ಹೆಚ್ಚುವರಿಯಾಗಿ ಸೇರ್ಪಡೆಗೊಳಿಸಲು ಹಾಗೂ ಇಂಜಿನಿಯರಿಂಗ್ ಪದವೀಧರರನ್ನು ಗಣಿತ-ವಿಜ್ಞಾನ ಶಿಕ್ಷಕರುಗಳನ್ನು ನೇಮಕ ಮಾಡಿಕೊಳ್ಳಲು ವೃಂದ ಮತ್ತು ನೇಮಕಾತಿ ನಿಯಮಗಳ ತಿದ್ದುಪಡಿಗೆ ಪ್ರಸ್ತಾಪಿಸಿ ಪ್ರಸ್ತಾವನೆ ಸಲ್ಲಿಸಲಾಗಿದ್ದು, ತಿದ್ದುಪಡಿ ಕ್ರಮಗಳು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿದೆ.<br>❖ ಮಕ್ಕಳಲ್ಲಿ ಕುತೂಹಲ ಕೆರಳಿಸುವುದು, ಸೃಜನಾತ್ಮಕತೆಯನ್ನು ವೃದ್ಧಿಸುವುದು ಹಾಗೂ ವೈಜ್ಞಾನಿಕ ಮನೋಭಾವನೆ ಮತ್ತು ವಿಜ್ಞಾನ ವಿಷಯಜ್ಞಾನವನ್ನು ಅಭಿವೃದ್ಧಿಪಡಿಸುವ ಉದ್ದೇಶವನ್ನಿಟ್ಟುಕೊಂಡು ಅಗಸ್ತ್ಯ ಅಂತರ ರಾಷ್ಟ್ರೀಯ ಪ್ರತಿಷ್ಠಾನದ ಸಹಯೋಗದೊಂದಿಗೆ ವಿಜ್ಞಾನ ಕೇಂದ್ರಗಳನ್ನು ಹಾಗೂ ವಿಜ್ಞಾನ ಕಾರ್ಯ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>❖ ಸ.ಶಿ.ಕದ ಯೋಜನೆಯಡಿಯಲ್ಲಿ ರಾಜ್ಯದ 20 ಜಿಲ್ಲೆಗಳಲ್ಲಿ ವಿಜ್ಞಾನ ಕೇಂದ್ರಗಳು, ಸಂಚಾರಿ ವಿಜ್ಞಾನ ಪ್ರಯೋಗಾಲಯಗಳು, ವಿಜ್ಞಾನ ಮೇಳಗಳು, ಶಿಕ್ಷಕರಿಗೆ ತರಬೇತಿ ಕಾರ್ಯಗಾರಗಳು ಹೀಗೆ ಹತ್ತು ಹಲವಾರು ಕಾರ್ಯಕ್ರಮಗಳ ಮೂಲಕ ಮಕ್ಕಳು ಮತ್ತು ಶಿಕ್ಷಕರೊಂದಿಗೆ ಒಡನಾಟ ಇಟ್ಟುಕೊಂಡಿದೆ.<br>❖ 2019-20ನೇ ಸಾಲಿನಲ್ಲಿ ಸುಮಾರು 954 ಶಾಲೆಗಳಿಂದ 31344 ವಿದ್ಯಾರ್ಥಿಗಳ ಮೌಲ್ಯಮಾಪನ ಮಾಡಿ Base line data ಪ್ರಕಾರ ಈ ಮಕ್ಕಳ ವಿಜ್ಞಾನ ವಿಷಯದಲ್ಲಿ |

| | |
|---|---|
| | ಶೇ.24ರಷ್ಟು ಜ್ಞಾನಮಟ್ಟವಿರುತ್ತದೆ ಎಂದು ಅಧ್ಯಯನ ತಿಳಿಸಿದೆ.<br>❖ ಈ ಅಧ್ಯಯನದ ಆಧಾರದ ಮೇಲೆ ವಿಜ್ಞಾನ ಕೇಂದ್ರಗಳು ಮತ್ತು ಇತರೆ ಕಾರ್ಯಚಟುವಟಿಕೆಗಳನ್ನು ಹಮ್ಮಿಕೊಂಡಿದ್ದರ ಪರಿಣಾಮವಾಗಿ ಮಕ್ಕಳಲ್ಲಿ ಸರಾಸರಿ ಶೇ.13ರಷ್ಟು ಜ್ಞಾನಮಟ್ಟದಲ್ಲಿ ಹೆಚ್ಚಳವಾಗಿದ್ದು, ಒಟ್ಟಾರೆ ವಿಜ್ಞಾನ ವಿಷಯದಲ್ಲಿನ ಜ್ಞಾನಮಟ್ಟ ಶೇ.37ಕ್ಕೆ ಏರಿಕೆಯಾಗಿರುತ್ತದೆ.(ಅನುಬಂಧ–1) |
| **ಇ)** ಪ್ರಾಥಮಿಕ ಶಿಕ್ಷಣದ ಹಂತದಲ್ಲಿ ಮೂಲ ವಿಜ್ಞಾನದ ಕುರಿತು ಆಸಕ್ತಿ ಬೇರೆಸುವಲ್ಲಿ ಇರುವ ಕೊರತೆಗಳನ್ನು ತುಂಬಲು ಸರ್ಕಾರ ನಡೆಸುತ್ತಿರುವ ಪ್ರಯತ್ನಗಳೇನು; | ವಿಜ್ಞಾನ ವಿಷಯದಲ್ಲಿ ಆಸಕ್ತಿ ಉಂಟು ಮಾಡಲು ಮುಖ್ಯವಾಗಿ ಅವಶ್ಯಕವಾಗಿರುವ ಚಟುವಟಿಕೆ ಆಧಾರಿತ ಪಠ್ಯಪುಸ್ತಕ, ಶಿಕ್ಷಕರಿಗಾಗಿ ಮಾಡಿ ತಿಳಿ ಬೋಧನಾ ಕ್ರಮಗಳ ತರಬೇತಿಗಳು, ಕಡಿಮೆ ವೆಚ್ಚದಲ್ಲಿ ಮಾದರಿ ತಯಾರಿಕಾ ಕಾರ್ಯಗಾರಗಳು, ನುರಿತ ಶಿಕ್ಷಕರಿಂದ ವಿದ್ಯಾರ್ಥಿಗಳಿಗೆ ಪಾಠ ಬೋಧನೆ, ಮಕ್ಕಳ ವಿಜ್ಞಾನ ಹಬ್ಬ, ಇನ್‌ಸ್ಪೈರ್ಡ್ ಅವಾರ್ಡ್ ಕಾರ್ಯಕ್ರಮ, ವಿಜ್ಞಾನ ಮೇಳಗಳು, ಶಾಲಾ ಹಂತದಲ್ಲಿ ಪ್ರಯೋಗಾಲಯಗಳು, ಶಾಲೆಗೆ ಭೇಟಿ ನೀಡುವ ಸಂಚಾರಿ ಪ್ರಯೋಗಾಲಯಗಳು, ಅಟಲ್ ಟಿಂಕರಿಂಗ್ ಲ್ಯಾಬ್‌ಗಳು, ಕಂಪ್ಯೂಟರ್ ಲ್ಯಾಬ್ ಇತ್ಯಾದಿ ಸೌಲಭ್ಯಗಳನ್ನು ಇತರೆ ಸಂಘ ಸಂಸ್ಥೆಗಳ ಸಹಯೋಗದೊಂದಿಗೆ ಸರ್ಕಾರವು ಪ್ರಾಥಮಿಕ ಶಾಲಾ ಹಂತದ ವಿದ್ಯಾರ್ಥಿಗಳಿಗಾಗಿ ವಿಜ್ಞಾನ ವಿಷಯದಲ್ಲಿನ ಗುಣಮಟ್ಟದ ಬೆಳವಣಿಗೆಗೆ ಕಾರ್ಯ ನಿರ್ವಹಿಸುತ್ತಿದೆ.<br><br>ಸರ್ಕಾರಿ ಪ್ರೌಢ ಶಾಲೆಗಳಿಗೆ ಸಂಬಂಧಿಸಿದಂತೆ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ನಿಗಧಿತ ವಿದ್ಯಾರ್ಹತೆ ಹೊಂದಿರುವ ಅರ್ಹ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳಲಾಗುತ್ತದೆ.<br><br>ಶಿಕ್ಷಕರ ಕೊರತೆ ನೀಗಿಸಲು ರಾಜ್ಯದ ಸರ್ಕಾರಿ ಪ್ರೌಢ ಶಾಲೆಗಳಲ್ಲಿನ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ನಿರ್ದೇಶಕರು(ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ದಿನಾಂಕ:30.05.2018, |

| | |
|---|---|
| | 18.02/2019 ರನ್ವಯ ರಾಜ್ಯದಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಪ್ರಸ್ತಾವನೆ ಸ್ವೀಕೃತಗೊಂಡಿದ್ದು, ಹುದ್ದೆ ಭರ್ತಿ ಕುರಿತಂತೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚನೆ ನಡೆಸಲಾಗುತ್ತಿದೆ. |
| **ಈ)** ಯೋಗ್ಯ ಹಾಗೂ ಗುಣಮಟ್ಟದ ವಿಜ್ಞಾನ ಮತ್ತು ಗಣಿತ ಶಿಕ್ಷಕರ ಕೊರತೆ ನೀಗಿಸಲು ಸರ್ಕಾರ ನಡೆಸುತ್ತಿರುವ ಪ್ರಯತ್ನಗಳೇನು; | ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರಿಗೆ ಕಾರ್ಯಗಾರಗಳನ್ನು ಆಯೋಜಿಸಲಾಗುತ್ತಿದೆ. ಸರ್ಕಾರಿ ಶಾಲೆಗಳಿಗೆ ಗಣಿತ ಮತ್ತು ವಿಜ್ಞಾನ ಉಪಕರಣಗಳನ್ನು ನೀಡಿದ್ದು, ಶಿಕ್ಷಕರು ಗುಣಮಟ್ಟದ ಗಣಿತ ಮತ್ತು ವಿಜ್ಞಾನ ವಿಷಯ ಬೋಧನೆಯನ್ನು ಮಾಡಲು ಸಹಕಾರಿಯಾಗಿರುತ್ತದೆ. ಚಟುವಟಿಕೆ ಆಧಾರಿತ ಪಠ್ಯಕ್ರಮವನ್ನು ಅಳವಡಿಸಲಾಗಿರುತ್ತದೆ. ಕಳೆದ 05 ವರ್ಷಗಳ ಸಾಲಿನಲ್ಲಿ ಐಐಎಸ್‌ಸಿ, ಕುದಾಪುರ, ಚಿತ್ರದುರ್ಗ ಜಿಲ್ಲೆ ಸಂಸ್ಥೆಯಿಂದ 6058 ಪ್ರೌಢ ಶಾಲಾ ಶಿಕ್ಷಕರಿಗೆ ವಿಜ್ಞಾನ ತರಬೇತಿಯನ್ನು ನೀಡಲಾಗಿರುತ್ತದೆ(ಅನುಬಂಧ-2) |
| **ಉ)** ಹತ್ತನೇ ತರಗತಿ ನಂತರ ನಾಲ್ಕು ವರ್ಷಗಳ ಅವಧಿಯ ಕೋರ್ಸ್‌ಗಳನ್ನು ಪ್ರಾಥಮಿಕ ಮಾಧ್ಯಮಿಕ ಶಿಕ್ಷಣದ ಮಕ್ಕಳಿಗೆ ವಿಜ್ಞಾನ ಮತ್ತು ಗಣಿತ ಬೋಧನೆ ಮಾಡುವ ಶಿಕ್ಷಕರನ್ನೇ ರೂಪಿಸುವ ಕೋರ್ಸ್ ಆರಂಭ ಮಾಡುವ ಬಗ್ಗೆ ಸರ್ಕಾರದ ಪ್ರಯತ್ನಗಳೇನು; | ಪ್ರಸ್ತುತ 10ನೇ ತರಗತಿ ನಂತರ ಪ್ರಾಥಮಿಕ ಶಿಕ್ಷಕರನ್ನು ರೂಪಿಸುವ ಕೋರ್ಸ್‌ಗಳಾದ ಡಿ.ಎಸ್.ಇಡಿ ಮತ್ತು ಡಿ.ಪಿ.ಇಡಿ ಕೋರ್ಸ್‌ಗಳನ್ನು ಎರಡು ವರ್ಷಗಳ ಪಿ.ಯು.ಸಿ ಉತ್ತೀರ್ಣರಾದ ಅಭ್ಯರ್ಥಿಗಳಿಗೆ ನೀಡಲಾಗುತ್ತಿದೆ. ಹತ್ತನೇ ತರಗತಿ ನಂತರ ಶಿಕ್ಷಕರನ್ನು ರೂಪಿಸಲು ಯಾವುದೇ ಕೋರ್ಸ್ ಆರಂಭ ಮಾಡಿರುವುದಿಲ್ಲ. |
| **ಊ)** ಹತ್ತನೇ ತರಗತಿ ನಂತರ ಆರು ವರ್ಷ ಕೋರ್ಸ್‌ಗಳನ್ನು ಕೇವಲ ಮೂಲ ವಿಜ್ಞಾನ ಹಾಗೂ ಗಣಿತ ಶಿಕ್ಷಕರನ್ನೇ ರೂಪಿಸಿ ಒಂಭತ್ತರಿಂದ ಹನ್ನೆರಡನೆ ತರಗತಿಯ ವಿದ್ಯಾರ್ಥಿಗಳಿಗೆ ಪಾಠ ಮಾಡಲು ಶಿಕ್ಷಕರನ್ನು ರೂಪಿಸಲು ಸರ್ಕಾರದ ಪ್ರಯತ್ನಗಳೇನು; | ಹತ್ತನೇ ತರಗತಿ ನಂತರ ಆರು ವರ್ಷ ಕೋರ್ಸ್‌ಗಳನ್ನು ಕೇವಲ ಮೂಲ ವಿಜ್ಞಾನ ಹಾಗೂ ಗಣಿತ ಶಿಕ್ಷಕರನ್ನೇ ರೂಪಿಸಿ 9 ರಿಂದ 12ನೇ ತರಗತಿ ವಿದ್ಯಾರ್ಥಿಗಳಿಗೆ ಗಣಿತ ಮತ್ತು ಮೂಲ ವಿಜ್ಞಾನ ಬೋಧಿಸಲು ಶಿಕ್ಷಕರನ್ನು ಸಿದ್ಧಪಡಿಸುವ ಯೋಜನೆ ಇರುವುದಿಲ್ಲ. |

**ಇಪಿ 80 ಪಿಎಂಸಿ 2021**

[ ಎಸ್.ಸುರೇಶ್ ಕುಮಾರ್]
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು.

AGASTYA INTERNATIONAL FOUNDATION

No. 101, Varsav plaza
12. Jayamahal Main Road.
Bangalore -560046
Ph+91-80-41124130
www.agastya.org

**OVERALL SCORES**




- Knowledge of alternative experiential methods of learning and teaching science (**AWARENESS**) is improved by **10%**
- Behavior characterized by exploration, investigation, observation, and a desire to learn more about new, incongruous, or unknown elements (**CURIOSITY**) is improved by **11%**
- The ability to stand up and speak their mind, to develop consciousness of their own ability and to demonstrate the same (**CONFIDENCE**) is improved by **12%**
- Understanding of Science concepts & application of the same (**SCIENCE KNOWLEDGE**) is improved by **13%**

ಅನುಬಂಧ-೨.

## Annexure-02

## High School statistics of teachers trained by IISC, Kudanur, Chitradurga

| Sl. No. | Year | HS |
|---|---|---|
| 1 | 2015-16 | 1313 |
| 2 | 2016-17 | 1122 |
| 3 | 2017-18 | 1253 |
| 4 | 2018-19 | 954 |
| 5 | 2019-20 | 950 |
| 6 | 2020-21 | 466 |
| Total | | 6058 |